ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ವಿದ್ಯುತ್ ಪ್ರಸರಣ ಮತ್ತು ಹಂಚಿಕೆ ವ್ಯವಸ್ಥೆ

ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು) –

365 (351) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕೇಂದ್ರ ಸರ್ಕಾರದ ಆರ್ಥಿಕ ಅನುದಾನದ ಯೋಜನೆಗಳ ಅಡಿ ರಾಜ್ಯ ಸರ್ಕಾರ ವಿದ್ಯುತ್ ಪ್ರಸರಣ ಮತ್ತು ಹಂಚಿಕೆ (Transmission and Distribution) ವ್ಯವಸ್ಥೆಯನ್ನು ಬಲಗೊಳಿಸಲು ಕೈಗೊಂಡಿರುವ ಯೋಜನೆಗಳು ಮತ್ತು ಗುರಿಗಳು ಯಾವುವು; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಕಳೆದ 3 ವರ್ಷಗಳಲ್ಲಿ ಈ ಯೋಜನೆಗಳ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಬಿಡುಗಡೆ ಆಗಿರುವ ಅನುದಾನವೆಷ್ಟು; ನಿಗದಿಪಡಿಸಿದ ಯೋಜನೆ ಮತ್ತು ಗುರಿಯಂತೆ ಪ್ರಸರಣ ಮತ್ತು ಹಂಚಿಕೆಯಲ್ಲಿ ಆಗಿರುವ ನಷ್ಟ ತಗ್ಗಿಸಲು ಸಾಧಿಸಲಾಗಿರುವ ಪ್ರಗತಿಗಳೇನು; (ಸಂಪೂರ್ಣ ವಿವರ ನೀಡುವುದು)

(ಇ) ಒಂದು ವೇಳೆ ನಿಗದಿಪಡಿಸಿದ ಯೋಜನೆ ಮತ್ತು ಗುರಿಯನ್ನು ಸಾಧಿಸಲು ವಿಫಲವಾಗಿದ್ದಲ್ಲಿ, ಅದಕ್ಕೆ ಕಾರಣಗಳೇನು; ಈ ವೈಫಲ್ಯದಲ್ಲಿ ಭಾಗಿಯಾಗಿರುವ ಸಂಸ್ಥೆಗಳು ಯಾವುವು; (ಸಂಪೂರ್ಣ ಮಾಹಿತಿ ನೀಡುವುದು)

(ಈ) Ujwal Discom Assurance Yojana (UDAY) ಅಡಿಯಲ್ಲಿ ನೀಡಲಾಗಿರುವ ಆರ್ಥಿಕ ನೆರವು ಸರಿಯಾಗಿ ಬಳಕೆಯಾಗಿದೆಯೇ; ಇಲ್ಲದಿದ್ದಲ್ಲಿ, ಇತ್ತೀಚಿನ ಕೇಂದ್ರ ಸರ್ಕಾರ Electricity Act ನ್ನು ಜಾರಿಗೆ ತರಲು ಉದ್ದೇಶಿಸಿರುವ ತಿದ್ದುಪಡಿಗಳಿಂದ ಖಾಸಗಿ Power Generator ಗಳಿಗೆ ನೇರವಾಗಿ ಬಾಕಿ ಹಣ ಪಾವತಿ ಮಾಡುವುದರಿಂದ, DISCOM ಗಳು ಇನ್ನಷ್ಟು ಆರ್ಥಿಕವಾಗಿ ಬಲಹೀನವಾಗುವುದಲ್ಲದೆ, ರಾಜ್ಯ ಸರ್ಕಾರಗಳ ಸಾಮಾಜಿಕ ಯೋಜನೆಗಳನ್ನು ಅನುಷ್ಠಾನಗೊಳಿಸಲು ವಿಫಲವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಉ) ಬಂದಿದ್ದಲ್ಲಿ, ಸರ್ಕಾರ ಯೋಜನೆಗಳ ಅನುಷ್ಠಾನದಲ್ಲಿ ಯಶಸ್ಸು ಹೊಂದಲು ಯಾವ ಕ್ರಮಗಳನ್ನು ಕೈಗೊಳ್ಳಲಿದೆ?